**ಕರ್ನಾಟಕ ವಿಧಾನ ಪರಿಷತ್**

| | | |
|---|---|---|
| ಕರ್ನಾಟಕ ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀದರರ ಕ್ಷೇತ್ರ) |
| ಪ್ರಶ್ನೆ ಸಂಖ್ಯೆ | : | 20 (06)✓ |
| ಉತ್ತರಿಸುವ ದಿನಾಂಕ | : | **29.01.2021** |
| ಉತ್ತರಿಸುವ ಸಚಿವರು | : | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು |
| ಚುಕ್ಕೆ ಗುರುತಿಲ್ಲದ ಪ್ರಶ್ನೆ | : | 06 (20) |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| 1. | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅಧೀನದಲ್ಲಿ ಎಷ್ಟು ನಿಗಮ/ಮಂಡಳಿಗಳು ಕಾರ್ಯನಿರ್ವಹಿಸುತ್ತಿವೆ: (ವಿವರ ನೀಡುವುದು). | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅಧೀನದಲ್ಲಿ ಎರಡು (2) ನಿಗಮ/ಮಂಡಳಿಗಳು ಕಾರ್ಯನಿರ್ವಹಿಸುತ್ತಿವೆ. ಇವುಗಳೆಂದರೆ ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿ ಮತ್ತು ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ. |
| 2. | ಸದರಿ ನಿಗಮ/ಮಂಡಳಿಗಳು ಯಾವ ವರ್ಷದಿಂದ ಕಾರ್ಯಾರಂಭವಾಗಿರುತ್ತದೆ: ಹಾಗೂ ಕಳೆದ 03 ವರ್ಷಗಳಲ್ಲಿ ಸದರಿ ನಿಗಮ/ ಮಂಡಳಿಗಳಿಗೆ ಒದಗಿಸಿದ ಅನುದಾನವೆಷ್ಟು: (ವಿವರ ನೀಡುವುದು) | ಅ) ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಯು 2010-11ನೇ ಸಾಲಿನಿಂದ ಕಾರ್ಯ ನಿರ್ವಹಿಸುತ್ತಿದ್ದು, ಕಳೆದ ಮೂರು ವರ್ಷಗಳಲ್ಲಿ ಸದರಿ ನಿಗಮ/ಮಂಡಳಿಗೆ ಈ ಕೆಳಕಂಡಂತೆ ಅನುದಾನ ಒದಗಿಸಲಾಗಿದೆ.<br><br>ಕ್ರ ಸಂ. / ಹಣಕಾಸು ವರ್ಷ / ಒದಗಿಸಲಾದ ಅನುದಾನ (ರೂ. ಲಕ್ಷಗಳಲ್ಲಿ)<br>01) 2017-18 — 887.00 (ಹೆಚ್ಚುವರಿ ಅನುದಾನ ರೂ.206.00 ಲಕ್ಷಗಳು ಸೇರಿ)<br>02) 2018-19 — 387.00<br>03) 2019-20 — 400.00<br>04) 2020-21 (ಪ್ರಸ್ತುತ ಸಾಲಿಗೆ ಮಂಜೂರಾಗಿರುವ ಅನುದಾನ ರೂ.130.00 ಲಕ್ಷಗಳು) — 97.50 (ಡಿಸೆಂಬರ್ - 2020 ರ ವರೆಗೆ ಬಿಡುಗಡೆಯಾಗಿರುವ ಅನುದಾನ)<br><br>ಆ) ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮವು 1974 ರಲ್ಲಿ ಕಾರ್ಯಾರಂಭ ಮಾಡಿದ್ದು, ಸರ್ಕಾರವು ಕಳೆದ ಮೂರು ವರ್ಷಗಳಲ್ಲಿ ಯಾವುದೇ ಅನುದಾನವನ್ನು ಒದಗಿಸಿರುವುದಿಲ್ಲ. |
| 3. | ಸದರಿ ಅನುದಾನವನ್ನು ಯಾವ ಯಾವ ಯೋಜನೆಗಳಿಗೆ ಬಳಸಲಾಗುತ್ತಿದೆ: ಮತ್ತು ಅವುಗಳು ಯಾವ ಹಂತದಲ್ಲಿವೆ? | **ಅ) ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿ**<br>ಸರ್ಕಾರದಿಂದ ಒದಗಿಸಲಾದ ಅನುದಾನವನ್ನು ಮಂಡಳಿಯು ಬಳಸಿಕೊಂಡು ಪರಿಸರ ಸ್ನೇಹಿ ಮತ್ತು ರೈತ ಸಮುದಾಯಕ್ಕೆ ಉಪಯುಕ್ತವಾಗುವ ಯೋಜನೆಗಳನ್ನು ರೂಪಿಸಿ ಅನುಷ್ಠಾನದಲ್ಲಿ ತೊಡಗಿರುತ್ತದೆ. ಅವುಗಳ ವಿವರಗಳು ಕೆಳಗಿನಂತಿವೆ:<br><br>1. ಮಂಡಳಿಯು ಜೈವಿಕ ಇಂಧನ ಅರಣ್ಯೀಕರಣ ಯೋಜನೆಯಡಿ ಹೊಂಗೆ, ಬೇವು, ಹಿಪ್ಪೆ, ಸೀಮರೂಬ ಮುಂತಾದ ನೆಡುತೋಪುಗಳನ್ನು ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ಭಾರತೀಯ ವಿಜ್ಞಾನ ಮಂದಿರದ ಆವರಣದಲ್ಲಿ (ಕ್ಯಾಂಪಸ್) ಸುಮಾರು 20 ಎಕರೆ ಪ್ರದೇಶದಲ್ಲಿ 10000 ಸಸಿಗಳನ್ನು ನೆಡಲಾಗಿದೆ. |

| | | |
|---|---|---|
| | | 2. ಜೈವಿಕ ಇಂಧನ ಸಂಶೋಧನೆ, ಮಾಹಿತಿ ಹಾಗೂ ಪ್ರಾತ್ಯಕ್ಷಿಕೆ ಕೇಂದ್ರಗಳು : ರಾಜ್ಯದ 30 ಜಿಲ್ಲೆಗಳಲ್ಲಿ 34 ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಈ ಕೇಂದ್ರಗಳಲ್ಲಿ ರೈತರಿಂದ ಬೀಜ ಸಂಗ್ರಹಣೆ, ಉತ್ಪಾದನೆ, ಮೌಲ್ಯವರ್ಧನೆ, ಮಾಹಿತಿ, ತರಬೇತಿ ಹಾಗೂ ಸಂಶೋಧನಾ ಚಟುವಟಿಕೆಗಳು ನಡೆಯುತ್ತಿವೆ.<br><br>3. ಜೈವಿಕ ಇಂಧನ ಉದ್ಯಾನಗಳು: ಜೈವಿಕ ಇಂಧನ ತರಬೇತಿ, ಸಂಶೋಧನೆ, ಸಂಸ್ಕರಣೆ, ಮೌಲ್ಯವರ್ಧನೆ, ತಳಿ ಅಭಿವೃದ್ಧಿ, ರೈತರ ಗುಂಪುಗಳ ರಚನೆ ಇವೇ ಮೊದಲಾದ ಜೈವಿಕ ಇಂಧನ ಚಟುವಟಿಕೆಗಳಿಗಾಗಿ 03 ಜೈವಿಕ ಇಂಧನ ಉದ್ಯಾನಗಳು ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿನ ಹಾಸನದ ಮಡೆನೂರು, ರಾಯಚೂರು ಕೃಷಿ ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿನ ತಿಂತಿಣಿ, ಯಾದಗಿರಿ ಜಿಲ್ಲೆ ಮತ್ತು ಧಾರವಾಡದ ಕೃಷಿ ವಿಶ್ವವಿದ್ಯಾಲಯ ವ್ಯಾಪ್ತಿಯಲ್ಲಿನ, ಧಾರವಾಡ ಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.<br><br>4. ಕ್ಲೋನಲ್ ಆರ್ಚರ್ಡ್‌ಗಳ ನಿರ್ಮಾಣ – ಉತ್ತಮ ತಳಿಯ ಜೈವಿಕ ಇಂಧನ ಸಸಿಗಳ ಅಭಿವೃದ್ಧಿಗಾಗಿ ರಾಜ್ಯದ 9 ಸ್ಥಳಗಳಲ್ಲಿ ಅರಣ್ಯ ಇಲಾಖೆಯ ಸಹಯೋಗದಲ್ಲಿ ಕ್ಲೋನಲ್ ಆರ್ಚರ್ಡ್‌ಗಳನ್ನು ನಿರ್ಮಾಣ ಮಾಡಲಾಗಿದೆ. ಪ್ರತಿ ಕೇಂದ್ರದಲ್ಲಿ ಸರಾಸರಿ 25.00 ಹೆ. ಪ್ರದೇಶಗಳಲ್ಲಿ ಗುಣಮಟ್ಟದ ಸಸಿಗಳ ಸಂಶೋಧನೆಗೆ ಒತ್ತು ನೀಡಲಾಗಿದೆ.<br><br>5. ಹೊಂಬೆಳಕು : ಗ್ರಾಮೀಣ ಪ್ರದೇಶದ ಮಹಿಳಾ ಸ್ವ-ಸಹಾಯ ಗುಂಪುಗಳನ್ನು ತೊಡಗಿಸಿಕೊಂಡು ಬೀಜ ಸಂಗ್ರಹಣೆ ಹಾಗೂ ವಿಕೇಂದ್ರಿಕೃತ ವ್ಯವಸ್ಥೆಯಲ್ಲಿ ತೈಲೋತ್ಪಾದನೆಗಾಗಿ "ಹೊಂಬೆಳಕು" ಯೋಜನೆ ಜಾರಿಯಲ್ಲಿದೆ. ರಾಜ್ಯದಲ್ಲಿ 14 ಕಿರು ತೈಲೋತ್ಪಾದನಾ ಯಂತ್ರಗಳನ್ನು ಮಹಿಳಾ ಸ್ವ-ಸಹಾಯ ಗುಂಪು ಹಾಗೂ ಗ್ರಾಮ ಅರಣ್ಯ ಸಮಿತಿಗಳಿಗೆ ಪ್ರಾಯೋಗಿಕವಾಗಿ ಒದಗಿಸಿದೆ.<br><br>6. ಹೊಂಗಿರಣ ಯೋಜನೆ : ಜೈವಿಕ ಇಂಧನ ಉತ್ಪನ್ನಗಳ ವ್ಯಾಪಾರ ವಹಿವಾಟಿಗಾಗಿ "ಹೊಂಗಿರಣ" ಯೋಜನೆಯನ್ನು ಪ್ರಾಯೋಗಿಕವಾಗಿ ವಿಜಯಪುರ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿ ಆರಂಭಿಸಿದೆ. ಈ ಕೇಂದ್ರದಲ್ಲಿ ಇಂಧನ ಸಸಿಗಳು, ಬೀಜಗಳ ಖರೀದಿ, ತೈಲ, ಹಿಂಡಿ ಹಾಗೂ ಇತರ ಉಪ ಉತ್ಪನ್ನಗಳ ಮಾರಾಟ ನಡೆದಿದೆ.<br><br>7. ಸಮುದಾಯ ತೊಡಗಿಸುವಿಕೆ : ಜೈವಿಕ ಸಸಿ ನೆಡುವ, ಬೀಜ ಸಂಗ್ರಹಿಸುವ, ಮೌಲ್ಯವರ್ಧನೆ, ಬಳಕೆ ಕುರಿತು ಸಮುದಾಯವನ್ನು ಸಕ್ರಿಯವಾಗಿ ಜೈವಿಕ ಇಂಧನ ಕಾರ್ಯಕ್ರಮ ಅನುಷ್ಠಾನದಲ್ಲಿ ತೊಡಗಿಸಿಕೊಳ್ಳಲಾಗಿದೆ.<br><br>8. ಜೈವಿಕ ಇಂಧನ ಸಂಶೋಧನೆ: ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿ (ಕೆ.ಎಸ್.ಸಿ.ಎಸ್.ಟಿ.) ಮೂಲಕ ರಾಜ್ಯದಲ್ಲಿ ವಿದ್ಯಾರ್ಥಿಗಳಿಂದ ಸಂಶೋಧನ ಚಟುವಟಿಕೆ ನಡೆಸಲಾಗುತ್ತಿದೆ. ತಾಂತ್ರಿಕ ಕಾಲೇಜುಗಳ ವಿಧ್ಯಾರ್ಥಿ ಸಂಶೋಧನಾ ಯೋಜನೆಗಳಿಗೆ ಆರ್ಥಿಕ ನೆರವು ನೀಡಿದೆ. |

| | | |
|---|---|---|
| | | ಇಂಜನೀಯರಿಂಗ್, ಬಯೋ ಟೆಕ್ನಾಲಜಿ, ಮ್ಯಾನೇಜ್‌ಮೆಂಟ್ ಇವೇ ಮೊದಲಾದ ವಿಷಯಗಳ ಕುರಿತು ಸಂಶೋಧನೆ ಕೈಗೊಳ್ಳಲಾಗಿದೆ.<br><br>9. ಮಾಹಿತಿ, ಶಿಕ್ಷಣ ಮತ್ತು ಸಂವಹನ ಕಾರ್ಯಕ್ರಮಗಳು : ಜೈವಿಕ ಇಂಧನ ಜಾಗೃತಿ ಮೂಡಿಸಲು ಮುದ್ರಣ. ದೃಶ್ಯ ಹಾಗೂ ಶ್ರವಣ ಮಾಧ್ಯಮಗಳ ವ್ಯಾಪಕ ಬಳಕೆಯೊಂದಿಗೆ ರೈತರಿಗೆ, ಸರ್ಕಾರಿ ಅಧಿಕಾರಿಗಳಿಗೆ ಹಾಗೂ ಸ್ವಯಂ ಸೇವಾ ಸಂಸ್ಥೆಗಳಿಗೆ ಜಾಗೃತಿ ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ. ಮಂಡಳಿಯೂ ಕಾರ್ಯಾಗಾರ, ತರಬೇತಿ, ಪ್ರಾತ್ಯಕ್ಷಿಕೆ, ಪ್ರದರ್ಶನ ಚಟುವಟಿಕೆಗಳನ್ನು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಆಯೋಜನೆ ಹಾಗೂ ಭಾಗವಹಿಸುವಿಕೆ ಮೂಲಕ ವ್ಯಾಪಕ ಪ್ರಚಾರ ಕಾರ್ಯ ಕೈಗೊಂಡಿದೆ.<br><br>ಜೈವಿಕ ಇಂಧನ ಸಂಶೋಧನೆ ಹಾಗೂ ಗುಣಮಟ್ಟ ಖಾತ್ರಿ ಪ್ರಯೋಗ ಶಾಲೆ : ಮಂಡಳಿಯು ಜೈವಿಕ ಇಂಧನ ಸಂಶೋಧನೆ ಹಾಗೂ ಗುಣಮಟ್ಟ ಖಾತ್ರಿ ಪ್ರಯೋಗಾಲಯವನ್ನು ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಸಹಯೋಗದಲ್ಲಿ ಸ್ಥಾಪಿಸಿರುತ್ತದೆ. ಈ ಸಂಶೋಧನಾ ಪ್ರಯೋಗ ಶಾಲೆಯು ಜೈವಿಕ ಇಂಧನ ಉತ್ಪಾದನೆ, ಗುಣಮಟ್ಟ ಪರೀಕ್ಷೆ, ಪ್ರಮಾಣೀಕರಣ ಹಾಗೂ ಬಳಕೆಯಲ್ಲಿ ಮಹತ್ತರ ಪಾತ್ರ ನಿರ್ವಹಿಸಲಿದೆ.<br><br>ಆ) ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಗಮ ನಿಯಮಿತ – ಅನ್ವಯಿಸುವುದಿಲ್ಲ. |

(ಕೆ.ಎಸ್ ಈಶ್ವರಪ್ಪ)
ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್
ಸಚಿವರು.

ಕೆ.ಎಸ್. ಈಶ್ವರಪ್ಪ
ಗ್ರಾಮೀಣಾಭಿವೃದ್ಧಿ ಮತ್ತು
ಪಂಚಾಯತ್ ರಾಜ್ ಸಚಿವರು



Government of Karnataka
(Rural Development and Panchayath Raj Department)
**Karnataka Rural Infrastructure Development Limited**
Grameenabhivruddhi Bhavana, 4th & 5th Floor, Anandarao Circle, Bengaluru - 560 009
Phone No.: Admn : 080-28015635/36/46 Works : 080-28015640/41 Accts : 080-28015634/37
Fax No. : 080-22879901, 28015644/45/34 Email-Id : md@kridl.net, Website : www.kridl.org

ಸಂ:ಕೆಆರ್‌ಐಡಿಎಲ್/ಆಡಳಿತ/ಎಲ್‌ಸಿಕ್ಯೂ-06/2020-21 ದಿನಾಂಕ 27-01-2021

ಗೆ,

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.
ಬಹುಮಹಡಿ ಕಟ್ಟಡ,
ಬೆಂಗಳೂರು.

ಮಾನ್ಯರೇ,

ವಿಷಯ: ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:06 ಕ್ಕೆ ಮಾಹಿತಿ ಒದಗಿಸುವ ಬಗ್ಗೆ.

** ** ** ** **

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಪರಿಷತ್ತಿನ ಮಾನ್ಯ ಸದಸ್ಯರಾದ ಶ್ರೀ ನಿರಾಣಿ ಹಣಮಂತ್ ರುದ್ರಪ್ಪ (ಪದವೀಧರ ಕ್ಷೇತ್ರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:06ಕ್ಕೆ ಸಂಬಂಧಿಸಿದಂತೆ ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಗೆ ಅನ್ವಯಿಸುವ ಮಾಹಿತಿಯನ್ನು ಸಿದ್ಧಪಡಿಸಿ ಈ ಪತ್ರದೊಂದಿಗೆ ಲಗತ್ತಿಸಿ, ಆದ್ಯ ಅವಗಾಹನೆಗಾಗಿ ಸಲ್ಲಿಸಿದೆ.

ತಮ್ಮ ವಿಶ್ವಾಸಿ,

ಅಡಕ: ಮೇಲಿನಂತೆ

Shreeroopa (signature)

ಮುಖ್ಯ ಆಡಳಿತಾಧಿಕಾರಿಗಳು
ಕೆಆರ್‌ಐಡಿಎಲ್, ಬೆಂಗಳೂರು.

# ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್

(ಹಿಂದಿನ ಹೆಸರು ಕರ್ನಾಟಕ ಭೂಸೇನಾ ನಿಗಮ ನಿ.)

"ಗ್ರಾಮೀಣಾಭಿವೃದ್ಧಿ ಭವನ", 4 & 5ನೇ ಮಹಡಿ, ಆನಂದರಾವ್ ವೃತ್ತ, ಬೆಂಗಳೂರು-560 009

ವಿಧಾನ ಪರಿಷತ್ತಿನ ಚುಕ್ಕೆ ಗುರುತಿನ ಪ್ರಶ್ನೆ : ಸಂ.06

ಪ್ರಶ್ನೆ ಕೇಳಿರುವವರ ಹೆಸರು : ಶ್ರೀ ಸಿರಾಣಿ ಹಣಮಂತ್ ರುದ್ರಪ್ಪ
ವಿಧಾನ ಪರಿಷತ್ ಸದಸ್ಯರು
(ಪದವೀಧರರ ಕ್ಷೇತ್ರ)

** ** ** **

| | | |
|---|---|---|
| (ಅ) | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅಧೀನದಲ್ಲಿ ಎಷ್ಟು ನಿಗಮ/ಮಂಡಳಿಗಳು ಕಾರ್ಯನಿರ್ವಹಿಸುತ್ತಿವೆ; (ವಿವರ ನೀಡುವುದು) | ➢ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅಧೀನದಲ್ಲಿ ಎಷ್ಟು ನಿಗಮ/ಮಂಡಳಿಗಳು ಕಾರ್ಯನಿರ್ವಹಿಸುತ್ತಿವೆ ಎಂಬುದರ ಬಗ್ಗೆ ಘನ ಸರ್ಕಾರವು ವಿವರಗಳನ್ನು ಒದಗಿಸಲು ಕೋರಿದೆ.<br>➢ ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಯು ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ಆಡಳಿತಾತ್ಮಕ ವ್ಯಾಪ್ತಿಯಲ್ಲಿ ಬರುತ್ತದೆ. |
| (ಆ) | ಸದರಿ ನಿಗಮ/ ಮಂಡಳಿಗಳು ಯಾವ ವರ್ಷದಿಂದ ಕಾರ್ಯಾರಂಭವಾಗಿರುತ್ತವೆ ಹಾಗೂ ಕಳೆದ 03 ವರ್ಷಗಳಲ್ಲಿ ಸದರಿ ನಿಗಮ/ಮಂಡಳಿಗಳಿಗೆ ಒದಗಿಸಿದ ಅನುದಾನವೆಷ್ಟು; (ವಿವರ ನೀಡುವುದು) | ➢ ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಯು 1974 ರಲ್ಲಿ ಕಾರ್ಯಾರಂಭಿಸಿರುತ್ತದೆ.<br>➢ ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ಧಿ ನಿಯಮಿತ ಸಂಸ್ಥೆಗೆ ಕಳೆದ 03 ವರ್ಷಗಳಲ್ಲಿ ರಾಜ್ಯ ಸರ್ಕಾರದಿಂದ ಆಡಳಿತಾತ್ಮಕ ವೆಚ್ಚಕ್ಕೆಂದು ಯಾವುದೇ ಅನುದಾನ ನೀಡಿರುವುದಿಲ್ಲ, ಆದರೆ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯು ವಿವಿಧ ಯೋಜನೆಯ ಕಾಮಗಾರಿಗಳ ಅನುಷ್ಠಾನಕ್ಕೆಂದು ಕಳೆದ ಮೂರು ವರ್ಷಗಳಲ್ಲಿ ರೂ.110486.11 ಲಕ್ಷಗಳಷ್ಟು ಅನುದಾನ ಬಿಡುಗಡೆ ಮಾಡಿರುತ್ತದೆ. |
| (ಇ) | ಸದರಿ ಅನುದಾನವನ್ನು ಯಾವ ಯಾವ ಯೋಜನೆಗಳಿಗೆ ಬಳಸಲಾಗುತ್ತಿದೆ ಮತ್ತು ಅವುಗಳು ಯಾವ ಹಂತದಲ್ಲಿವೆ? | ➢ ವಿವರಗಳನ್ನು ಅನುಬಂಧ-'ಅ' ದಲ್ಲಿ ಸಲ್ಲಿಸಿದೆ. |

ಮುಖ್ಯ ಅಭಿಯಂತರರು
ಕೆಆರ್‌ಐಡಿಎಲ್, ಬೆಂಗಳೂರು

# KARANATAKA RURAL INFRASTRUCTURE DEVELOPMENT LIMITED

## WORKS TAKEN UP BY KRIDL- ENTRUSTED BY R.D.P.R DEPT. DETAILS OF LAST THREE YEARS.

Rs. In lakhs

| Sl. No | Name of work / Scheme | YEAR OF ENTRUST MENT | No.of Villages / Works sanctioned | Approved Estimate Cost | Fund released to KRIDL by EA | Expenditure Incurred | No of works completed | No of works Under Progress | No of works to be started |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | Taluk Panchayath Building | 2017-18 | 5 | 500.00 | 500.00 | 450.00 | 4 | 1 | 0 |
| 2 | Additional works under Suvarna Grama Yojane | 2017-18 2018-19 | 852 | 27202.58 | 23091.77 | 21151.58 | 569 | 74 | 209 |
| 3 | 5054 Flood | 2019-20 | 2532 | 59290.79 | 55969.95 | 43578.26 | 1630 | 595 | 307 |
| 4 | 5054 Non Flood | 2019-20 | 565 | 16187.00 | 14551.50 | 10008.92 | 291 | 181 | 94 |
| 5 | 3054 | 2016-17, 2018-19 & 2019-20 | 1444 | 36942.85 | 16372.89 | 13344.00 | 318 | 277 | 849 |
| | Total | | 5399 | 140123.22 | 110486.11 | 88532.85 | 2812 | 1128 | 1459 |

**Note: For the Works of SL No. 2, 3, 4 & 5 Funds Realesed locally/Centrally.**

CHIEF ENGINEER (BBMP)
Karnataka Rural Infrastructure Development Limited
Grameenabhivrudhi Bhavana,
Anand Rao Circle, Bangalore - 560009



[illegible]

**Karnataka State Bioenergy Development Board**

ಸಂಖ್ಯೆ : KSBDB/LAQ 06/CR-18/2020-21/ 4 1

ದಿನಾಂಕ : 27.01.2021

ಇವರಿಗೆ,

ಸರ್ಕಾರ ದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,
ಬೆಂಗಳೂರು.

ಮಾನ್ಯರೆ,

ವಿಷಯ: ವಿಧಾನ ಪರಿಷತ್ ಮಾನ್ಯ ಸದಸ್ಯರಾದ ಶ್ರೀ ನಿರಾಣಿ ಹಣಮಂತ್ ರುದ್ರಪ್ಪ, (ಪಧವೀದರರ ಕ್ಷೇತ್ರ) ಅವರ ಚುಕ್ಕೆ ಗುರುತಿನ / ಗುರುತಿಲ್ಲದ ಪ್ರಶ್ನೆ ಸಂಖ್ಯೆ.- 06 ಕ್ಕೆ ಉತ್ತರ.

ಉಲ್ಲೇಖ: ಪತ್ರ ಸಂಖ್ಯೆ: ಎಲ್.ಸಿ.ಕ್ಯೂ 06/143ನೇ 143ನೇ-2020, ದಿ.21.01.2021

*****

ಕರ್ನಾಟಕ ವಿಧಾನ ಸಭಾ ಮಾನ್ಯ ಸದಸ್ಯರಾದ ಶ್ರೀ ನಿರಾಣಿ ಹಣಮಂತ್ ರುದ್ರಪ್ಪ, (ಪಧವೀದರರ ಕ್ಷೇತ್ರ) ಅವರು ಕೋರಿರುವ ಚುಕ್ಕೆ-ಗುರುತಿನ / ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ.- 06 ಕ್ಕೆ ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಗೆ ಸಂಬಂಧಿಸಿದ ಉತ್ತರವನ್ನು ಸಿದ್ಧಗೊಳಿಸಿ ಇದರೊಂದಿಗೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿದೆ.

ಧನ್ಯವಾದಗಳೊಂದಿಗೆ,

ತಮ್ಮ ವಿಶ್ವಾಸಿ,

ವ್ಯವಸ್ಥಾಪಕ ನಿರ್ದೇಶಕರು.

27/1/21



ಕಛೇರಿ : ಮಹಾತ್ಮ ಗಾಂಧಿ ಗ್ರಾಮೀಣ ಇಂಧನ ಅಭಿವೃದ್ಧಿ ಸಂಸ್ಥೆ (ಎಂಜಿಐಆರ್‌ಇಡಿ), ಶ್ರೀರಾಮಪುರ ಕ್ರಾಸ್, ಜಕ್ಕೂರು, ಬೆಂಗಳೂರು - 560064
Off: Mahatma Gandhi Institute of Rural Energy and Development (MGIRED), Sriramapura Cross, Jakkuru, Bengaluru -560064
Ph.- 080-23623200 / 23628199 | Email: pschairmanbiofuels@gmail.com